# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 899 (1041)
2. ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸುವ ದಿನಾಂಕ : 21.09.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕಿನ ಬಿಡದಿ ಹೋಬಳಿಯ ಶ್ಯಾನುಮಂಗಲ ಗ್ರಾಮದ ಸರ್ವೆ ನಂ. 54/8 ರಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳ ಎಷ್ಟು ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡಿದೆ; (ವಿವರ ನೀಡುವುದು) | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಬಿಡದಿ ಕೈಗಾರಿಕಾ ಪ್ರದೇಶ, 2ನೇ ಹಂತ, 2ನೇ ಸೆಕ್ಟರ್‌ಗಾಗಿ ರಾಮನಗರ ಜಿಲ್ಲೆ ಮತ್ತು ತಾಲ್ಲೂಕು, ಬಿಡದಿ ಹೋಬಳಿ, ಶ್ಯಾನುಮಂಗಲ ಗ್ರಾಮದ ಸರ್ವೆ ನಂ: 54/8 ರಲ್ಲಿ 2-06 ಎಕರೆ ವಿಸ್ತೀರ್ಣದ ಜಮೀನನ್ನು ಭೂಸ್ವಾಧೀನಪಡಿಸಲು ದಿನಾಂಕ: 04.10.2007 ರಂದು ಅಂತಿಮ ಅಧಿಸೂಚನೆ ಹೊರಡಿಸಲಾಗಿದೆ. |
| (ಆ) | ಈ ಪೈಕಿ ಎಷ್ಟು ಜಮೀನನ್ನು ವಿವಿಧ ಉದ್ದೇಶಗಳಿಗೆ ಸಂಸ್ಥೆ / ಕಂಪನಿಗಳಿಗೆ ಹಂಚಿಕೆ ಮಾಡಲಾಗಿದೆ; ಹಂಚಿಕೆ ಮಾಡಿದ ಜಮೀನನ್ನು ಸದರಿ ಸಂಸ್ಥೆಗಳಿಗೆ ನೋಂದಣಿ ಮಾಡಿಕೊಡಲಾಗಿದೆಯೇ; ಎಷ್ಟು ಸಂಸ್ಥೆಗಳಿಗೆ ಈವರೆಗೆ ನೋಂದಣಿ | ಈ ಪೈಕಿ ಕೆಳಕಂಡ ನಿವೇಶನಗಳು ಭಾಗಶಃ ಸರ್ವೆ ನಂ: 54/8 ರಲ್ಲಿ ಬರುತ್ತದೆ. |

| ಕ್ರ. ಸಂ | ಹಂಚಿಕೆದಾರರ ಹೆಸರು | ನಿವೇಶನ ಸಂಖ್ಯೆ | ವಿಸ್ತೀರ್ಣ (ಎಕರೆ) |
|---|---|---|---|
| 1 | Business Process Matrix Pvt. Ltd., | 107 | 0.50 |
| 2 | Unicita Consulting Pvt Ltd., | 110 | 1.00 |

<table>
<tr>
<td></td>
<td>ಮಾಡಿಕೊಟ್ಟಿರುವುದಿಲ್ಲ: (ವಿವರ ನೀಡುವುದು)</td>
<td>
<table>
<tr><td>3</td><td>Presscom Products Pvt Ltd.,</td><td>111 & 112</td><td>1.00</td></tr>
<tr><td>4</td><td>Prestige Alloys</td><td>127</td><td>1.00</td></tr>
</table>
ಕ್ರಮ ಸಂಖ್ಯೆ: 2 & 4 ರಲ್ಲಿ ಹಂಚಿಕೆದಾರರು ಹಂಚಿಕೆಯಾದ ಜಮೀನಿನಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಿ, ಘಟಕಗಳು ಕಾರ್ಯನಿರ್ವಹಿಸುತ್ತಿರುತ್ತವೆ.
ಶ್ಯಾನುಮಂಗಲ ಗ್ರಾಮದ ಸರ್ವೆ ನಂ: 54/6 (ರಿಟ್ ಅಪೀಲ್ ಸಂಖ್ಯೆ: 3256/ 2010 ತಡೆಯಾಜ್ಞೆ ಇರುತ್ತದೆ) ಮತ್ತು 54/7ಎ2 (ರಿಟ್ ಅಪೀಲ್ ಸಂಖ್ಯೆ: 2805/2013) ರ ಭೂವ್ಯಾಜ್ಯಗಳಿಂದಾಗಿ ಸಂಪರ್ಕ ರಸ್ತೆ ಕಲ್ಪಿಸಿಲ್ಲವಾದ್ದರಿಂದ ಕ್ರಮ ಸಂಖ್ಯೆ: 1 & 3 ರಲ್ಲಿ ಹಂಚಿಕೆದಾರರಿಗೆ ಸ್ವಾಧೀನ ಪತ್ರವನ್ನು ನೀಡಿರುವುದಿಲ್ಲ.
</td>
</tr>
<tr>
<td>(ಇ)</td>
<td>2011ರಲ್ಲೇ ಹಂಚಿಕೆ ಆಗಿದ್ದರೂ ಈವರೆಗೆ ನೋಂದಣಿ ಮಾಡಿಕೊಡದೇ ಕರ್ತವ್ಯಲೋಪ ಎಸಗಿರುವ ಅಧಿಕಾರಿ / ಸಿಬ್ಬಂದಿಗಳ ವಿವರ ನೀಡುವುದು; ಈ ಅಧಿಕಾರಿ / ಸಿಬ್ಬಂದಿಗಳ ವಿರುದ್ಧ ಸಿ.ಸಿ.ಎ ನಿಯಮಾವಳಿ ಅನ್ವಯ ಯಾವ ಕ್ರಮ ಕೈಗೊಳ್ಳಲಾಗುವುದು:</td>
<td>
ಶ್ಯಾನುಮಂಗಲ ಗ್ರಾಮದ ಸರ್ವೆ ನಂ: 54/6 (ರಿಟ್ ಅಪೀಲ್ ಸಂಖ್ಯೆ: 3256/ 2010 ತಡೆಯಾಜ್ಞೆ ಇರುತ್ತದೆ) ಮತ್ತು 54/7ಎ2 (ರಿಟ್ ಅಪೀಲ್ ಸಂಖ್ಯೆ: 2805/2013) ರ ಭೂವ್ಯಾಜ್ಯಗಳಿಂದಾಗಿ ಸರ್ವೆ ನಂ: 54/8 ರ ಜಮೀನುಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಸಾಧ್ಯವಾಗದ ಹಿನ್ನೆಲೆಯಲ್ಲಿ, ಹಂಚಿಕೆದಾರರಿಗೆ ನಿವೇಶನ ಸಂಖ್ಯೆ: 107, 111 & 112 ಕ್ಕೆ ಸ್ವಾಧೀನ ಪತ್ರವನ್ನು ನೀಡಿರುವುದಿಲ್ಲ.
ಮಾನ್ಯ ನ್ಯಾಯಾಲಯದಲ್ಲಿ ತಡೆಯಾಜ್ಞೆ ಇರುವುದರಿಂದ, ಯಾವುದೇ ಅಧಿಕಾರಿ / ಸಿಬ್ಬಂದಿಗಳ ವಿರುದ್ಧ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ.
</td>
</tr>
</table>

| | | |
|---|---|---|
| (ಈ) | ನೋಂದಣಿ ಬಾಕಿ ಇರುವವರಿಗೆ ಯಾವ ಕಾಲಮಿತಿಯೊಳಗೆ ನೋಂದಣಿ ಮಾಡಿಕೊಡಲಾಗುವುದು? | ಶ್ಯಾನುಮಂಗಲ ಗ್ರಾಮದ ಸರ್ವೆ ನಂ: 54/6 & 54/7ಎ2 ರ ಜಮೀನಿನ ಭೂಮಾಲೀಕರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿರುವ ರಿಟ್ ಅಪೀಲ್ ಸಂಖ್ಯೆ: 3256/2010 ಮತ್ತು 2805/2013 ಪ್ರಕರಣಗಳು ಇತ್ಯರ್ಥಗೊಳ್ಳಬೇಕಾಗಿರುತ್ತದೆ. |

ಸಂಖ್ಯೆ: ಸಿಐ 184 ಐಎಪಿ (ಇ) 2021

(ಮುರುಗೇಶ್ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು